## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 789
2. ಸದಸ್ಯರ ಹೆಸರು : ಶ್ರೀ ಆರ್.ಬಿ. ತಿಮ್ಮಾಪೂರ
3. ಉತ್ತರಿಸಬೇಕಾದ ದಿನಾಂಕ : 17-09-2021
4. ಉತ್ತರಿಸಬೇಕಾದ ಸಚಿವರು : ಮುನಿರತ್ನ

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರದ ವಿವಿಧ ಇಲಾಖೆಗಳಲ್ಲಿರುವ ಯಾವ ಯಾವ ಯೋಜನೆಗಳು ಹೆಚ್ಚು ಜನರನ್ನು ತಲುಪಿವೆ; ಈ ಬಗ್ಗೆ ಸಮೀಕ್ಷೆ ನಡೆಸಲಾಗಿದೆಯೇ; (ವಿವರಗಳನ್ನು ಒದಗಿಸುವುದು) | ಸರ್ಕಾರದ ವಿವಿಧ ಇಲಾಖೆಗಳಲ್ಲಿ ಫಲಾನುಭವಿ ಆಧಾರಿತ ಹಾಗೂ ಮೂಲಭೂತ ಸೌಕರ್ಯಕ್ಕೆ ಸಂಬಂಧಿಸಿದಂತೆ 2021-22ನೇ ಸಾಲಿನಲ್ಲಿ 1033 ಯೋಜನೆಗಳಿದ್ದು ಈ ಪೈಕಿ 291 ಯೋಜನೆಗಳು ಫಲಾನುಭವಿ ಆಧಾರಿತ ಯೋಜನೆಗಳಾಗಿದ್ದು 742 ಯೋಜನೆಗಳು ಮೂಲಭೂತ ಸೌಕರ್ಯಕ್ಕೆ ಸಂಬಂಧಿಸಿದ ಯೋಜನೆಗಳಾಗಿವೆ. ಈ ಯೋಜನೆಗಳಿಗೆ ಸುಮಾರು ರೂ. 1,13,052.37 ಕೋಟಿಗಳಷ್ಟು ಅನುದಾನವನ್ನು ಪ್ರಸಕ್ತ ಸಾಲಿನಲ್ಲಿ ಒದಗಿಸಲಾಗಿರುತ್ತದೆ. ಎಲ್ಲಾ ಯೋಜನೆಗಳು ಪ್ರತ್ಯಕ್ಷ/ಪರೋಕ್ಷವಾಗಿ ಜನರನ್ನು ತಲುಪುತ್ತಿದ್ದು ಆದರೆ, ಈ ಬಗ್ಗೆ ಇಲ್ಲಿಯವರೆಗೆ ಯಾವುದೇ ಸಮೀಕ್ಷೆ ನಡೆಸಲಾಗಿರುವುದಿಲ್ಲ. 2021-22ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ರೂ.100 ಕೋಟಿಗಿಂತ ಮೇಲಿರುವ ಬೃಹತ್ ಯೋಜನೆಗಳನ್ನು ಕಡ್ಡಾಯವಾಗಿ ಮೌಲ್ಯಮಾಪನ ಮಾಡಲಾಗುವುದೆಂದು ಘೋಷಿಸಿದ್ದು ಯೋಜನಾ ಇಲಾಖೆಯಲ್ಲಿನ ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದ ವತಿಯಿಂದ ಸಮೀಕ್ಷೆ ಕೈಗೊಳ್ಳಲು ಕ್ರಮವಹಿಸಲಾಗಿದೆ. |
| ಆ) | ನಡೆಸಿದ್ದಲ್ಲಿ, ಸಮೀಕ್ಷೆ ಫಲಿತಾಂಶವೇನು; ಅನುಪಯುಕ್ತ ಯೋಜನೆಗಳಿಗೆ ಅನಾವಶ್ಯಕವಾಗಿ ಹಣ ಮೀಸಲಿಡುವ ಬದಲು ಹೆಚ್ಚು ಬಳಕೆಯಾಗುವ ಯೋಜನೆಗಳಿಗೆ ಹೆಚ್ಚು ಅನುದಾನವನ್ನು ಒದಗಿಸುವ ನಿಟ್ಟಿನಲ್ಲಿ ಸರ್ಕಾರ ಕ್ರಮ ಕೈಗೊಳ್ಳಬಹುದೇ? | ಸಮೀಕ್ಷೆ ವರದಿ ಬಂದ ನಂತರ ಸೂಕ್ತ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ:ಪಿಡಿಎಸ್ 28 ಐಪಿಆರ್ 2021 ಪಿಎಂಐ

(ಮುನಿರತ್ನ)
ಸಚಿವರು, ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ
ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.